ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೯ ನವೆಂಬರ್ ೨೦೧೩ ಸಂಚಿಕೆ : ೧೧

## ಕನ್ನಡ ರಾಜ್ಯೋತ್ಸವ ಹಾರ್ದಿಕ ಶುಭಾಶಯಗಳು





ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀ ಪ್ರಣವ್ ಮುಖರ್ಜಿ ಅವರು ಮೈಸೂರಿನಲ್ಲಿ ಜೆ.ಎಸ್.ಎಸ್. ಮಲ್ಟಿ ಸ್ಪೆಷಾಲಿಟಿ ಅಸ್ಪತ್ರೆಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹಾಗೂ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಕರ್ನಾಟಕದ ರಾಜ್ಯಪಾಲರಾದ ಶ್ರೀ ಹೆಚ್.ಆರ್. ಭಾರದ್ವಾಜ್ ಹಾಗೂ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಉಪಸ್ಥಿತರಿದ್ದರು.



ಮೈಸೂರಿನಲ್ಲಿ ಜೆ.ಎಸ್.ಎಸ್. ಆಸ್ಪತ್ರೆಯ ಲೋಕಾರ್ಪಣೆ ಸಮಾರಂಭದಲ್ಲಿ ಸುತ್ತೂರು ಜಗದ್ಗುರುಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಗೌರವ ಸಮರ್ಪಣೆ ಮಾಡುತ್ತಿರುವುದು.




ತುಮಕೂರಿನ ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜಿನ ರಜತ ಮಹೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಸಂಸದ ಶ್ರೀ ಜಿ.ಎಸ್. ಬಸವರಾಜ, ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು –572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪

ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


**ಸಂಪುಟ : ೪೯ ನವೆಂಬರ್ ೨೦೧೩ ಸಂಚಿಕೆ : ೧೧**


## ಒಳಪುಟಗಳಲ್ಲಿ ......................




**ಚಂದಾ ವಿವರ : ವಾರ್ಷಿಕ ಚಂದಾ ರೂ. 200/–**
**ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 12.00**

# ಕನ್ನಡ ರಾಜ್ಯೋತ್ಸವ

**ರಾ**ಜ್ಯೋತ್ಸವ, ೫೮ನೇ ರಾಜ್ಯೋತ್ಸವ. ಕನ್ನಡ ರಾಜ್ಯೋತ್ಸವ. ೧೯೫೬ ಕನ್ನಡ ರಾಜ್ಯೋತ್ಸವದ ಉದಯ. ೧೯೭೩ರವರೆಗೆ ವಿಶಾಲ ಮೈಸೂರೆಂಬ ಹೆಸರು. ೧೯೭೩ರಿಂದ ಕರ್ನಾಟಕವಾಯಿತು. ನಡೆದು ಬಂದ ದಾರಿಯನ್ನು ತಿರುಗಿ ನೋಡಿದಾಗ ನಾಡು ಒಂದಾಗಲು, ನುಡಿ ಉಳಿಯಲು ಕಾರಣರಾದ ಮಹನೀಯರು ಅದೆಷ್ಟೊಂದು ಪುಣ್ಯಜೀವಿಗಳು. ಅವರ ನೆನಪೇ ಒಂದು ಮಹಾಬೆಳಕು.

'ಉತ್ತರ ಕರ್ನಾಟಕದಲ್ಲಿ ಪ್ರಬಲವಾಗಿದ್ದುದು ಮರಾಠಿ ಭಾಷೆ. ಹುಬ್ಬಳ್ಳಿ ಯಾರೋ ಒಬ್ಬರು 'ಕನ್ನಡವು ಹಳ್ಳಿಯ ಜನರು ಆಡುವ ಗ್ರಾಮ್ಯ ಭಾಷೆ. ಸುಸಂಸ್ಕೃತರು ಯಾರೂ ಅದನ್ನು ಆಡುವುದಿಲ್ಲ. ಲಿಂಗಾಯತರು ಮಾತ್ರ ಆಡುತ್ತಾರೆ' ಎಂದು ಹೀಯಾಳಿಸಿದಂತೆ ಮಾತನಾಡಿದಾಗ, ಹಾಗೆ ಮಾತನಾಡಿದವರ ವಿರುದ್ಧ ತಿರುಗಿ ಬಿದ್ದು 'ನಿಮ್ಮದು ಹಳ್ಳಿಯ ಜನರನ್ನು, ಲಿಂಗಾಯತರನ್ನು ಶೋಷಣೆ ಮಾಡುವ, ಅವರನ್ನು ತಿಂದು ಅವರ ಮೇಲೆಯೇ ತಿರುಗಿ ಬೀಳುವ ಸಂಸ್ಕೃತಿ' ಎಂದು ತಿರುಗೇಟು ನೀಡಿದ್ದವರು ಸರ್. ಸಿದ್ಧಪ್ಪ ಕಂಬಳಿಯವರು. (ಪುಟ ೭೮, ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು. ಪ್ರಧಾನ ಸಂಪಾದಕರು-ಮುಖ್ಯಮಂತ್ರಿ ಚಂದ್ರು-ಸಂಪಾದಕರು-ಡಾ॥ ಎಚ್.ಎಸ್. ಗೋಪಾಲರಾವ್- ಉಪಸಂಪಾದಕರು ಡಾ॥ ಶೀಲಾ ಕಾಂತ ಪತ್ತಾರ, ಶ್ರೀ ಡಿ.ಎನ್. ಅಕ್ಕಿ, ಡಾ॥ ಹನುಮ ನಾಯಕ್, ಶ್ರೀ ಜಿ.ಕೆ. ದೇವರಾಜಸ್ವಾಮಿ- ಪ್ರಕಾಶಕರು - ಕರ್ನಾಟಕ ಸರ್ಕಾರ- ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು)

ಇಲ್ಲಿ ಗಮನಿಸಬಹುದಾದ ಎರಡು ವಿಚಾರಗಳು ಇವೆ. ಒಂದು ಕನ್ನಡವು ಹಳ್ಳಿಯ ಜನರಾಡುವ ಗ್ರಾಮ್ಯ ಭಾಷೆ, ಎರಡು ಲಿಂಗಾಯತರು ಮಾತ್ರ ಆಡುತ್ತಾರೆ' ಎಂಬುದು. ಸರ್. ಸಿದ್ಧಪ್ಪ ಕಂಬಳಿಯವರು ಯೋಗ್ಯ ಉತ್ತರವನ್ನೇ ಕೊಟ್ಟಿದ್ದಾರೆ. ನಿಜ ಕನ್ನಡ ಹಳ್ಳಿಯ ಜನರಾಡುವ ಗ್ರಾಮ ಭಾಷೆಯೇ, ಆ ಭಾಷೆಯ ಸತ್ವವನ್ನು ಅರಿತವರು, ಅದರ ಮಣ್ಣಿನ ವಾಸನೆಯನ್ನು ಅನುಭವಿಸಿದವರು ಕೊಟ್ಟಿರುವ ಜನಪದ ಸಾಹಿತ್ಯವನ್ನು ಗಮನಿಸಿದಾಗ ತಿಳಿದೀತು ಕನ್ನಡದ ಸತ್ವ. ಅಂತೆಯೇ 'ಲಿಂಗಾಯತರು ಮಾತ್ರ ಆಡುತ್ತಾರೆ' ಎಂಬುದು. ವಚನ ಸಾಹಿತ್ಯದಂಥ ಅನನ್ಯ ಸಾಹಿತ್ಯವನ್ನು ರೂಪಿಸಿದ್ದು ಲಿಂಗಾಯತರ ಸಂಸ್ಕೃತಿ ಎಂಬುದನ್ನು ಗಮನಿಸಿದಾಗ ಕನ್ನಡಕ್ಕಾಗಿ ದುಡಿದವರು ಎಂಥ ಮಹನೀಯರು? ಎಂಬುದು ತಿಳಿದೀತು.

ಇಂದೂ ಸಹ ಕನ್ನಡದ ಉಳಿವಿಗೆ, ಬೆಳವಣಿಗೆಗೆ ಸೇವೆ ಸಲ್ಲಿಸುತ್ತಿರುವ ಹಳ್ಳಿಗರು ನಾಡು-ನುಡಿಯ ಅಕ್ಕರೆಯ ಸಿರಿಯಜ್ಜಿ, ಸಾಲುಮರದ ತಿಮ್ಮಕ್ಕ, ಸೂಲಗಿತ್ತಿ ನರಸಮ್ಮನಂಥವರನ್ನು, ಲಿಂಗಾಯತ ಮಠಗಳಾದ ಭಾಲ್ಕಿಯ ಹಿರೇಮಠ, ಬೆಳಗಾವಿಯ ನಾಗನೂರಿನ ರುದ್ರಾಕ್ಷಿಮಠವನ್ನು, ಚಿಂಚಣಿಯ ಕನ್ನಡ ಮಠವೆಂದೇ ಹೆಸರಾಗಿರುವ ಸಿದ್ಧ ಸಂಸ್ಥಾನಮಠವನ್ನು, ಇಲಕಲ್‌ನ ಚಿತ್ತರಗಿ ಮಹಾಂತೇಶ ಮಠವನ್ನು, ಡಂಬಳ-ಗದಗಿನ ಸಂಸ್ಥಾನ ಮಠವನ್ನು, ಸುತ್ತೂರು ಜೆಎಸ್‌ಎಸ್ ಮಹಾಸಂಸ್ಥಾನ ಮಠವನ್ನು, ಸಿರಿಗೆರೆಯ ತರಳಬಾಳು ಶ್ರೀಮಠವನ್ನು, ಚಿತ್ರದುರ್ಗದ ಶ್ರೀ ಮುರುಘಾಮಠವನ್ನು, ಇಡೀ ಕರ್ನಾಟಕದಲ್ಲಿ ಒಂದೇ ಒಂದು ಕನ್ನಡ ಪಂಡಿತ ಇಂಟಿಗ್ರೇಟೆಡ್ ಪ್ರಥಮ ದರ್ಜೆ ಕಾಲೇಜನ್ನು ಸೇವಾಮುಖಿಯನ್ನಾಗಿಸಿರುವ ಶ್ರೀ ಸಿದ್ಧಗಂಗಾ ಮಠದಂಥ ಸಂಸ್ಥೆಗಳು ಮತ್ತು ಇನ್ನು ಹಲವಾರು ಲಿಂಗಾಯತ ಮಠಗಳು ಕನ್ನಡ ಭಾಷಾಭಿವೃದ್ಧಿಗಾಗಿ ಮಾಡುತ್ತಿರುವ ಸೇವೆಯನ್ನು ಹೃದಯವಂತರು ಸ್ಮರಿಸುತ್ತಿರುವುದು ಅಭಿನಂದನೀಯ.

'ಸಿದ್ಧಗಂಗಾ' ದ ಎಲ್ಲ ಬಂಧು-ಭಗಿನಿಯರಿಗೆ ರಾಜ್ಯೋತ್ಸವದ ಹಾಗೂ ದೀಪಾವಳಿಯ ಶುಭಾಷಯಗಳು.

-ಸಂಪಾದಕ





ಶ್ರೀ ವಾ ಣಿ

# ನಿಷ್ಠೆ

ನಿಷ್ಠೆ ಎಲ್ಲರದ ಯಶಸ್ಸಿಗೆ ಕಾರಣ. ನಿಷ್ಠೆಯಿದ್ದಾಗ ತನ್ನ ಇಷ್ಟಾರ್ಥವನ್ನು ಸಾಧಿಸಿ ಕೊಳ್ಳಬಲ್ಲ. ಆದರೆ ಇಂದು ನಿಷ್ಠೆಯಿಲ್ಲದವರೇ ಎಲ್ಲೆಲ್ಲೂ ಕಾಣುತ್ತಿದ್ದಾರೆ. ರಾಜಕೀಯ ರಂಗದಲ್ಲಂತೂ 'ನಿಷ್ಠೆ'ಯ ಅಭಾವ ಎದ್ದು ಕಾಣುತ್ತಿದೆ. ಸ್ವಾರ್ಥಕ್ಕಾಗಿ, ಸ್ವಲಾಭಕ್ಕಾಗಿ, ಸ್ವಹಿತಕ್ಕಾಗಿ ಏನೆಲ್ಲ ಮಾಡುವವರು ವಿಜೃಂಭಿಸುತ್ತಿದ್ದಾರೆ. ತತ್ವದಲ್ಲಿ ನಂಬಿಕೆಯಿಲ್ಲ, ಮೌಲ್ಯಗಳ ಬಗ್ಗೆ ಆದರವಿಲ್ಲ. ಇಂದು ಒಂದು ಪಕ್ಷ, ನಾಳೆ ಇನ್ನೊಂದು ಪಕ್ಷ, ನಾಡಿದ್ದು ಮತ್ತೊಂದು ಪಕ್ಷ. 'ಹೌದಪ್ಪನ ಚಾವಡಿಯಲ್ಲಿ ಹೌದಪ್ಪ, ಇಲ್ಲಪ್ಪನ ಚಾವಡಿಯಲ್ಲಿ ಇಲ್ಲಪ್ಪ' ಎಂಬುವವರೇ ಎಲ್ಲೆಲ್ಲೂ ಮಿಂಚುತ್ತಿದ್ದಾರೆ. ಕೇವಲ ರಾಜಕೀಯಕ್ಕೆ ಮಾತ್ರ ಸೀಮಿತವಾಗಿಲ್ಲ 'ನಿಷ್ಠೆ'ಯ ವಿಚಾರ. ಜೀವನದ ಎಲ್ಲ ಕ್ಷೇತ್ರಗಳಲ್ಲೂ ನಿಷ್ಠೆಯ ಅಭಾವ ಎದ್ದು ಕಾಣುತ್ತಿದೆ. ಅಧಿಕಾರಿಗಳಲ್ಲಿ, ಅಧ್ಯಾಪಕರಲ್ಲಿ, ಸಾಮಾಜಿಕ ಕಾರ್ಯಕರ್ತರಲ್ಲಿ ಧಾರ್ಮಿಕ ಕ್ಷೇತ್ರದಲ್ಲಿಯೂ ನಿಷ್ಠೆ ಇಳಿಮುಖ ವಾಗಿ ನಡೆದಿದೆ. ಸ್ವಾಮಿಗಳಾದವರು ತಮ್ಮ ಕರ್ತವ್ಯದ ಕಡೆಗೆ ಗಮನ ಕೊಡುತ್ತಿಲ್ಲ. ಲೌಕಿಕ ಮುಖಿಗಳಾಗಿ ಸಾಗಿದ್ದಾರೆ. ಆಧ್ಯಾತ್ಮಿಕ ಚಿಂತನೆಗಳಿಗಿಂತಲೂ 'ಕೀರ್ತಿವಾರ್ತಾ'ಕಾಮಿಗಳಾಗು ತ್ತಿದ್ದಾರೆ, ಪೂಜೆ, ಧ್ಯಾನ, ತಪಸ್ಸು, ಅಧ್ಯಯನ ಸೇವೆ ಚಿಂತನ-ಮಂಥನಗಳ ಬದಲು ಲೌಕಿಕರಂತೆ ಸಾಗಿದ್ದಾರೆ. ಸಮಾಜ ತಮ್ಮತ್ತ ನೋಡುತ್ತದೆ ಎಂಬ ಅರಿವಿನಿಂದ ದೂರ ಸರಿಸಿದ್ದಾರೆ. ಅಲ್ಲೊಬ್ಬ ಇಲ್ಲೊಬ್ಬ ಸದ್ಗೃಹಸ್ಥರು ಸ್ವಾಮಿಗಳಾದವರನ್ನು ಸಾತ್ವಿಕ ಭಾವನೆಯಿಂದ ಪ್ರಶ್ನೆ ಮಾಡಿದರೆ ನಿರುತ್ತರರಾಗುತ್ತಿದ್ದಾರೆ. ಆದರೆ ತಮ್ಮ ನೈಜ ಜೀವನಶೈಲಿಯಿಂದ ಬದುಕ ಬೇಕಾದಂತೆ ಬದುಕುತ್ತಿಲ್ಲ. ಇನ್ನು ಭಕ್ತ ಸಮುದಾಯಕ್ಕೆ ಏನು ಹೇಳುತ್ತಾರೆ ಇವರು. ಒಟ್ಟಾರೆ, ಎಲ್ಲರೂ ತಮ್ಮ ತಮ್ಮ ಕರ್ತವ್ಯಪಾಲನೆಯಲ್ಲಿ ನಿಷ್ಠೆಯಿಂದ ಇರುತ್ತಿಲ್ಲವೆಂಬುದನ್ನು ವಿಷಾದದಿಂದಲೇ ಹೇಳಬೇಕಾಗಿದೆ. ನಮ್ಮ ಪೂಜ್ಯಗುರುಗಳು ನಮಗೆ 'ನಿಷ್ಠೆ'ಯ ಗುಟ್ಟನ್ನು ಕಲಿಸಿಕೊಟ್ಟರು. ಜೀವನವೆಂಬುದು ಒಂದು ತಪಸ್ಸು ಎಂಬ ಪೂಜ್ಯ ಭಾವನೆ ಬರಬೇಕು ಎಂಬುದನ್ನು ತಮ್ಮ ದಿನಚರಿಯ ಮೂಲಕ ತೋರಿಸಿಕೊಟ್ಟರು. ಪೂಜ್ಯರ ಸ್ಮರಣೆಯಲ್ಲಿಯೇ ನಾವು ಸಂಸ್ಥೆಯ ಸೇವಾಪಥದಲ್ಲಿ ನಡೆದಿದ್ದೇವೆ. ಅದರಲ್ಲಿ ನಮಗೆ ಸಂತೋಷವಿದೆ. ನಮ್ಮ ಸ್ವಾಮಿಗಳೂ (ಶ್ರೀ ಸಿದ್ಧಲಿಂಗಸ್ವಾಮಿಗಳು) 'ಗುರುಪಥ'ಗಾಮಿಗಳಾಗಿ ಮುನ್ನಡೆಯುತ್ತಿರು ವುದನ್ನು ಗಮನಿಸುತ್ತಿದ್ದೇವೆ.

☆

ॐ

## ಶ್ರೀ ಸಿದ್ಧಲಿಂಗೇಶ್ವರ ವಚನ

ಅಸತ್ತು ಅಚಿತ್ತು ಅನಾನಂದಾದಿಗಳಲ್ಲದಂದು
ಸಚ್ಚಿದಾನಂದ ಪರಬ್ರಹ್ಮ ನೀನೆಯಾಗಿ
ಎಲ್ಲಾ ತತ್ವಂಗಳಿಗೆ ನೀನಾಶ್ರಯನಾಗಿ
ನಿನಗೊಂದಾಶ್ರಯವಿಲ್ಲದೆ ನೀ ನಿರಾದಿಯಾದ ಕಾರಣ
ನಿನ್ನ ನಿಃಕಲ ಶಿವತತ್ವವೆಂದರಿದೆನು ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ

ನಿತ್ಯ ಅನಿತ್ಯ ಸ್ವರೂಪವಾದ ದೇಹವು, ಜ್ಞಾನ ಅಜ್ಞಾನ ಸ್ವರೂಪವಾದ ಮನಸ್ಸು, ಸುಖದುಃಖ ಸ್ವರೂಪವಾದಾತ್ಮನು ಇಲ್ಲದಂದು ಸಚ್ಚಿದಾನಂದ ಪರಬ್ರಹ್ಮ ನೀನೆಯಾಗಿ, ಮೂವತ್ತಾರು ತತ್ವಂಗಳಿಗೆ ನೀನೆ ಆಲಯವಾಗಿ, ಸಮಸ್ತ ತತ್ವಂಗಳಿಗೆ ನೀನೆ ಆಶ್ರಯನಾಗಿ, ನಿನಗೊಂದರಾಶ್ರಯವಿಲ್ಲದೆ, ನೀನೆ ನಿಷ್ಕಲ ಬ್ರಹ್ಮವೆಂದು ಹೇಳುವೆನು ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಏನಾದರಾಗಬಹುದು ನೀನಾಗಲರಿಯದು
ಗುರುಲಿಂಗ ಜಂಗಮ ನೀನಹುದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ।

ನೀನಿರುವ ಲೋಕವೆ ದೇವಲೋಕವೆಂಬೆ
ನೀನಿರುವ ತಾಣವೆ ಕೈಲಾಸ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವೆ ಗುರುವೆಂಬ ಅನುಭಾವ ಲಿಂಗವೆಂಬ
ಆನಂದವೆ ಜಂಗಮವೆಂದೆಂಬ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿನಿಂದನುಭವ ಅನುಭಾವದಿಂದರಿವು
ಅರಿವು ಅನುಭಾವಗಳೆ ಆನಂದವೆಂದೆಬ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮದರುಶನವೆನಗೆ ಪರಮಪೂಜೆಯೆಬೆ
ನಿಮ್ಮ ಪಾದದ ಸೋಂಕು ಶಿವಸೋಂಕು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ನುಡಿಯೊಳಗೆನಗೆ ಲೋಕದರ್ಶನವಾಯ್ತು
ನಿನ್ನ ನುಡಿಯೊಳಗೆನಗೆ ಕಲ್ಯಾಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಿನ ಜ್ಞಾನಿಗಳ ನೀ ಕಂಡು ನಗುತಿರುವೆ
ಆತು ಮನನರಿಯದ ಜಾಣರದು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೇದವಿದರನುಬಲ್ಲೆ ನಾದಬ್ರಹ್ಮರ ಬಲ್ಲೆ
ಭಕತಿ ಶುದ್ಧರನು ಅರಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಾತಿಯ ನರಸುವ ಜಾತಿಜಂಗಮರನಡುವೆ
ನೀತಿ ಜಂಗಮರ ರೂಪಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರ್ಚನ ಅರ್ಪಣ ಅನುಭಾವ ಮುಖದಿಂದೆ
ನಿಮ್ಮ ಕಾಣುವ ಗುರುವೆ ಅನುದಿನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





## ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಸುವರ್ಣ ಮಹೋತ್ಸವ
## ಬಡತನ ನಿರ್ಮೂಲನೆ ಆಗದೆ ದೇಶದ ಪ್ರಗತಿ ಅಸಾಧ್ಯ - ಡಾ. ಎ.ಪಿ.ಜೆ. ಅಬ್ದುಲ್ ಕಲಾಂ

-ಎಚ್.ಎಸ್. ಸಿದ್ಧಗಂಗಪ್ಪ

ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಸುವರ್ಣಮಹೋತ್ಸವವನ್ನು ಮಾಜಿ ರಾಷ್ಟ್ರಪತಿ ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀಗಳವರು ಕಲಾಂರವರಿಗೆ ನೆನಪಿನ ಕಾಣಿಕೆಯನ್ನು ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು, ಸರ್ವೋಚ್ಛ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಗೌರವಾನ್ವಿತ ಶ್ರೀ ಎಂ.ಎನ್. ವೆಂಕಟಾಚಲಯ್ಯ ಅವರು ಹಾಗೂ ಮತ್ತಿತರ ಗಣ್ಯರು ಉಪಸ್ಥಿತರಿದ್ದರು.

**"ದೇಶ ಅಭಿವೃದ್ಧಿ ಹೊಂದಬೇಕಾದರೆ ಮೊದಲು ಬಡತನ ನಿರ್ಮೂಲನೆ ಆಗಬೇಕು"** ಎಂದು ಮಾಜಿ ರಾಷ್ಟ್ರಪತಿ ಡಾ.ಎ.ಪಿ.ಜೆ. ಅಬ್ದುಲ್‌ಕಲಾಂ ಅವರು ಅಭಿಪ್ರಾಯಪಟ್ಟರು.

ಸೆಪ್ಟೆಂಬರ್ ೧೮ ರಂದು ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಆವರಣದಲ್ಲಿ ಶ್ರೀ ಶಿವಕುಮಾರ ಸ್ವಾಮಿ ಕ್ರೀಡಾಂಗಣದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಉಪಸ್ಥಿತಿಯಲ್ಲಿ ಹಾಗೂ ಸರ್ವೋಚ್ಛ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಶ್ರೀ ಎಂ.ಎನ್. ವೆಂಕಟಾಚಲಯ್ಯ ಅವರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದ ಸುವರ್ಣ ಮಹೋತ್ಸವ ಸಮಾರಂಭವನ್ನು ವಿದ್ಯುತ್ ಗುಂಡಿ ಒತ್ತಿ ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಮಾತನಾಡಿದರು.

ಅವರು ತಮ್ಮ ಉದ್ಘಾಟನಾ ಭಾಷಣದಲ್ಲಿ ದೇಶದ ಅಭಿವೃದ್ಧಿಗೆ ಪೂರಕವಾಗುವ ಅನೇಕ ವಿಷಯಗಳನ್ನು ಪ್ರಸ್ತಾಪಿಸಿ ಅವುಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನಗೊಳಿಸಿದರೆ ದೇಶವನ್ನು ಪ್ರಗತಿಯತ್ತ ಕೊಂಡೊಯ್ಯಬಹುದು ಎಂದು ಹೇಳಿದರು.

ರಾಜ್ಯದಲ್ಲಿ ಸಣ್ಣಪ್ರಮಾಣದ 'ವಾಟರ್‌ಗ್ರಿಡ್' ನಿರ್ಮಾಣ ಮಾಡುವ ಮೂಲಕ ಬರಪೀಡಿತ ಪ್ರದೇಶಗಳಿವೆ. ನೀರಾವರಿ

೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಸಂದರ್ಭ, ಹಮ್ಮಿಕೊಳ್ಳಲಾಗಿದ್ದ ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಹುಯಿಲಗೋಳ ನಾರಾಯಣರಾಯರು ಬರೆದ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಕವಿತೆಯನ್ನು ಮೊದಲ ಬಾರಿಗೆ ಹಾಡಲಾಯಿತು. - ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು.



ಸಭೆಯನ್ನು ಕುರಿತು ಉದ್ಬೋಧಕ ಭಾಷಣ ನೀಡುತ್ತಿರುವ ಕಲಾಂಜಿ ರವರು

ಸೌಲಭ್ಯ ಕಲ್ಪಿಸಲು ರಾಜ್ಯ ಸರ್ಕಾರ ಮುಂದಾಗ ಬೇಕು. ದೊಡ್ಡ ಪ್ರಮಾಣದ ಅಣೆಕಟ್ಟು ನಿರ್ಮಾಣ ಮಾಡಿದರೆ ಆರ್ಥಿಕವಾಗಿ ಹೆಚ್ಚು ಹೊರೆಯಾಗುವುದು. ಆದ್ದರಿಂದ ಚಿಕ್ಕ-ಚಿಕ್ಕ ಅಣೆಕಟ್ಟುಗಳನ್ನು ನಿರ್ಮಿಸಿದರೆ ವ್ಯರ್ಥವಾಗಿ ಹರಿದು ಹೋಗುವ ನೀರನ್ನು ಸಂಗ್ರಹಿಸಿ ಬರಪೀಡಿತ ಪ್ರದೇಶಗಳಿಗೆ ಹರಿಯುವಂತೆ ಮಾಡಿದರೆ ಕೃಷಿಗೆ ಅನುಕೂಲವಾಗುವುದು. ಇದರಿಂದ ವಿದ್ಯುತ್ ಉತ್ಪಾದನೆ ಮಾಡಲು ಸಹಕಾರಿ ಯಾಗುತ್ತದೆ ಎಂದು ಅಭಿಪ್ರಾಯಪಟ್ಟರು.

ಡಾ. ಕಲಾಂ ಅವರು ತಮ್ಮ ಭಾಷಣದಲ್ಲಿ ಕರ್ನಾಟಕದಲ್ಲಿ ಉತ್ತಮ ಅರಣ್ಯವಿದೆ. ಉತ್ತಮ ಮಳೆಯೂ ಬೀಳುತ್ತಿದೆ. ಈ ಮಳೆ ನೀರನ್ನು ಸದ್ಬಳಕೆ ಮಾಡಿಕೊಳ್ಳಲು ಕರ್ನಾಟಕ ಸರ್ಕಾರ ಮಳೆ ಬೀಳುವ ಪ್ರದೇಶಗಳಿಂದ 'ಕರ್ನಾಟಕ ಸ್ಮಾರ್ಟ್ ವಾಟರ್ ವೇಗ್ರಿಡ್' ನಿರ್ಮಿಸಲಿ ಎಂದು ಸಲಹೆ ನೀಡಿದರು.

ವಿಜ್ಞಾನ ಮತ್ತು ತಂತ್ರಜ್ಞಾನದ ಎಲ್ಲಾ ಕ್ಷೇತ್ರಗಳಿಗೂ ಸಮ್ಮಿಳನಗೊಂಡು ರಾಷ್ಟ್ರದ ಅಭಿವೃದ್ಧಿಗೆ ಪೂರಕವಾಗಿ ಕೆಲಸ ಮಾಡುವ ಅಗತ್ಯವಿದೆ ಎಂದು ಹೇಳಿದ ಕಲಾಂ ಅವರು ಜ್ಞಾನದ ಜೊತೆಗೆ ಹೊಸ ತಾಂತ್ರಿಕತೆಯನ್ನು ಸಮರ್ಪಕವಾಗಿ ಬಳಸಿಕೊಂಡರೆ ಸಮರ್ಥ, ಬಲಿಷ್ಠ ರಾಷ್ಟ್ರ ನಿರ್ಮಾಣ ಸಾಧ್ಯವಾಗಲಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಉಂಟಾಗುತ್ತಿರುವ ಬದಲಾವಣೆಗಳು ಗ್ರಾಮೀಣ ಭಾರತವನ್ನು ತಲುಪಬೇಕಿದೆ. ಈ ನಿಟ್ಟಿನಲ್ಲಿ ಎಂಜಿನಿಯ ರಿಂಗ್ ಪದವೀಧರರು ಕಾರ್ಯೋನ್ಮುಖರಾಗಬೇಕಿದೆ ಎಂದು ಕರೆ ನೀಡಿದರು. ತಾವು ಬಾಲ್ಯದಲ್ಲಿ ಬೆಳೆದು ಬಂದ ಪರಿಸರ ತಮ್ಮ ಬೆಳವಣಿಗೆಗೆ ಯಾವ ರೀತಿ ಸಹಕಾರಿ ಯಾಯಿತು ಎಂಬ ಬಗ್ಗೆ ಪ್ರಸ್ತಾಪಿಸಿದ ಡಾ. ಕಲಾಂ ಅವರು 'ತಾಂತ್ರಿಕ ಸಂಶೋಧನೆ ತಜ್ಞತೆ ಜಾಗತಿಕ ಮಟ್ಟದ ಸ್ಪರ್ಧೆಗೆ ತಳಹದಿ.. ಸಂಶೋಧನಾತ್ಮಕ ಗುಣ ನಮ್ಮ ಸಂಸ್ಕೃತಿಯಲ್ಲಿ ಮೂಡಿ ಬರಬೇಕಿದೆ. ಬದ್ಧತೆ, ಕಠಿಣ ಅಭ್ಯಾಸದಿಂದಷ್ಟೇ ತಜ್ಞರಾಗಲು ಸಾಧ್ಯ' ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ಅವರು "ಯಾವ ದೇಶ ಶಿಕ್ಷಣ, ಕೃಷಿ, ಐಟಿ-ಬಿಟಿ ಕ್ಷೇತ್ರಗಳ ಪ್ರಗತಿಗೆ ಹೆಚ್ಚಿನ ಸೌಲಭ್ಯಗಳನ್ನು ನೀಡುತ್ತದೆಯೋ ಅಂತಹ ದೇಶ ಬಹುಬೇಗನೆ ಅಭಿವೃದ್ಧಿ ಹೊಂದಲು ಸಾಧ್ಯ. ಹಾಗಾಗಿ ಸರ್ಕಾರಗಳು ತಮ್ಮ ಪ್ರತಿ ಜಿಲ್ಲೆಗಳಿಗೂ ಉತ್ತಮ ನೀರು ಹಾಗೂ ವಿದ್ಯುತ್ ಸೌಲಭ್ಯವನ್ನು ಒದಗಿಸುವ ಮೂಲಕ ನಾಡಿನ ಪ್ರಗತಿ ಹಾಗೂ ಸಂಸ್ಕೃತಿಯನ್ನು ಉತ್ತುಂಗಕ್ಕೆ ಕೊಂಡೊಯ್ಯಬೇಕಿದೆ. ನಾವು ನಮ್ಮ ಕನಸುಗಳನ್ನು ನನಸಾಗಿಸಲು ನಿರಂತರವಾಗಿ ಕಠಿಣ ಶ್ರಮವಹಿಸಿದಾಗ ಮಾತ್ರ ನಾವು ಯಶಸ್ಸಿನ ಶಿಖರವನ್ನೇರಲು ಸಾಧ್ಯ. **ಶಿಕ್ಷಣ ಸಂಸ್ಥೆಗಳು ನೀಡುವ ಸರ್ಟಿಫಿಕೇಟ್‌ಗಳಿಗಿಂತ ನಮ್ಮ ಜೀವನ ವಿಧಾನ ಉತ್ತಮವಾಗಿಬೇಕು.** ಈ ನಿಟ್ಟಿನಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯೂ ಕಾರ್ಯೋನ್ಮುಖರಾಗುವ ಮೂಲಕ ರಾಷ್ಟ್ರಕ್ಕೆ ಮಹತ್ತರವಾದ ಕೊಡುಗೆಯನ್ನು ನೀಡಬೇಕು ಎಂದರು.

ಭಾರತ ೨೦೨೦ರ ಹೊತ್ತಿಗೆ ಪ್ರಬಲ ರಾಷ್ಟ್ರವಾಗಿ, ಸ್ವಸ್ವರೂಪ ಪಡೆದುಕೊಳ್ಳುವ ನಿಟ್ಟಿನಲ್ಲಿ ವಿದ್ಯಾರ್ಥಿಗಳು ಮುನ್ನಡೆಯಬೇಕು. ಸಾಂಪ್ರದಾಯಿಕತೆಯನ್ನು ಕೈಬಿಟ್ಟು ಕ್ರಿಯಾಶೀಲರಾಗಿ ಆರ್ಥಿಕತೆಯನ್ನು ಕಟ್ಟಬೇಕಿದೆ ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

**ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆ ಮತ್ತು ಸಂವರ್ಧನೆಗೆ ಹೋರಾಡಿದವರಲ್ಲಿ ಪ್ರಮುಖರಾಗಿದ್ದ ನಂಜುಂಡಯ್ಯ ಎಚ್.ವಿ. ಅವರು ೧೯೧೫ರಿಂದ ೧೯೧೯ರವರೆಗೆ ಪರಿಷತ್ತಿನ ಅಧ್ಯಕ್ಷರೂ ಆಗಿದ್ದರು.**
**- ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು.**





ನೀರು, ಇಂಧನ, ಘನತ್ಯಾಜ್ಯ ನಿರ್ವಹಣೆ ದೇಶ ಎದುರಿಸುತ್ತಿರುವ ದೊಡ್ಡ ಸವಾಲು. ಈ ಸವಾಲುಗಳನ್ನು ಮೆಟ್ಟಿ ನಿಲ್ಲಲು ವಿಜ್ಞಾನ, ತಂತ್ರಜ್ಞಾನ ಬಳಕೆ ಅತ್ಯಗತ್ಯವಾಗಿದೆ. ಜೈವಿಕ, ನ್ಯಾನೋ, ಮಾಹಿತಿ ತಂತ್ರಜ್ಞಾನದ ತಳಹದಿಯಲ್ಲಿ ಈ ಸವಾಲುಗಳಿಗೆ ಉತ್ತರ ಕಂಡುಕೊಳ್ಳಬಹುದಾಗಿದೆ. ಈ ತಂತ್ರಜ್ಞಾನ ಕ್ಷೇತ್ರಗಳಿಗೆ ಹೊಸ ಸಂಶೋಧನೆ ಕೈಗೊಳ್ಳುವ ಮೂಲಕ ದೇಶಕ್ಕೆ ಅಮೂಲ್ಯ ಕೊಡುಗೆ ನೀಡಬಹುದು ಎಂದು ತಿಳಿಸಿದರು.

ಭಾರತದ ಬೆನ್ನೆಲುಬಾದ ಕೃಷಿ ಕ್ಷೇತ್ರದ ಅಭಿವೃದ್ಧಿಗೆ ಪೂರಕವಾದ ಯೋಜನೆಗಳನ್ನು ರೂಪಿಸುವ ನಿಟ್ಟಿನಲ್ಲಿ ವಿದ್ಯಾರ್ಥಿಗಳು ಕಾರ್ಯ ಪ್ರವೃತ್ತರಾಗಬೇಕು. ಕೃಷಿ, ಕೈಗಾರಿಕೆ ಮತ್ತು ಸೇವಾಕ್ಷೇತ್ರಗಳು ಒಟ್ಟಾಗಿ ರಾಷ್ಟ್ರದ ಅಭಿವೃದ್ಧಿಗೆ ಶ್ರಮಿಸುವ ಅಗತ್ಯವಿದೆ ಎಂದರು. ಗ್ರಾಮೀಣ ಪ್ರದೇಶಗಳು ಸರ್ವತೋಮುಖ ಅಭಿವೃದ್ಧಿಗೆ ಸಹಕಾರಿ ಯಾದ 'ಪುರ' ಯೋಜನೆಯ ಅನುಷ್ಠಾನದ ಬಗ್ಗೆಯೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಗಮನಹರಿಸುವ ಅಗತ್ಯವಿದೆ ಎಂದು ಒತ್ತಿ ಹೇಳಿದರು.

ರಾಷ್ಟ್ರದ ಸರ್ವತೋಮುಖ ಪ್ರಗತಿಗೆ ಪ್ರತಿಯೊಬ್ಬರು ವಿದ್ಯಾವಂತರಾಗಬೇಕು. ಆಗ ಮಾತ್ರ ದೇಶದ ಅಭಿವೃದ್ಧಿ ಸಾಧ್ಯ. ಭಾರತ ಹಳ್ಳಿಗಳ ದೇಶ. ರೈತನೇ ದೇಶದ ಬೆನ್ನೆಲುಬು. ಗ್ರಾಮೀಣ ಪ್ರದೇಶದ ಮಕ್ಕಳು ಉನ್ನತ ಶಿಕ್ಷಣ ಪಡೆಯಬೇಕು ಆ ಮೂಲಕ ರಾಷ್ಟ್ರಕ್ಕೆ, ತೆಂದೆ ತಾಯಿಗಳಿಗೆ ಉತ್ತಮ ಹೆಸರು ತರಬೇಕೆಂದು ಕರೆ ನೀಡಿದರು.

ವಿದ್ಯಾರ್ಥಿಗಳು ಶ್ರದ್ಧೆ ಮತ್ತು ಪರಿಶ್ರಮದಿಂದ ಅಧ್ಯಯನ ಮಾಡಿದಾಗ ಅರಿವಿನ ದಿಗಂತ ವಿಸ್ತಾರವಾಗುತ್ತದೆ. ನಾವು ಯಾವುದೇ ಕೆಲಸ ಮಾಡುವಾಗ ಆತ್ಮವಿಶ್ವಾಸ ಮುಖ್ಯ. ಆತ್ಮವಿಶ್ವಾಸದಿಂದ ಕೆಲಸ ಮಾಡಿದರೆ ಯಶಸ್ಸು ತಾನಾಗಿಯೇ ದೊರೆಯುತ್ತದೆ ಎಂದು ಅಭಿಪ್ರಾಯಪಟ್ಟರು. ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳ ಪಾಲಿಗೆ ಆಶಾಕಿರಣವಾಗಿದೆ. ಐವತ್ತು ವರ್ಷಗಳ ಯಾನವನ್ನು ಪೂರೈಸುವ ಮೂಲಕ ಸುವರ್ಣ ಮಹೋತ್ಸವ ಸಂಭ್ರಮಾಚರಣೆಯಲ್ಲಿರುವುದು ಸಂತಸದ ಸಂಗತಿ ಎಂದು ಶ್ಲಾಘಿಸಿದರು.

ಸಿದ್ಧಗಂಗಾ ವಿದ್ಯಾ ಸಂಸ್ಥೆ ಶ್ರೇಷ್ಠ ಮತ್ತು ನಾಗರಿಕ ವಿದ್ಯಾರ್ಥಿಗಳನ್ನು ಸಮಾಜಕ್ಕೆ ನೀಡುತ್ತಿದೆ. ಸಿದ್ಧಗಂಗಾ ಕ್ಷೇತ್ರದಲ್ಲಿ ಸಾಮಾಜಿಕ, ಅರ್ಥಿಕ ಅಭಿವೃದ್ಧಿ ಹಾಗೂ ಏಕತೆಯನ್ನು ಜೋಡಿಸುವ ಕೆಲಸದಲ್ಲಿ ಶ್ರೀಗಳು ತೊಡಗಿ ದ್ದಾರೆ. ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಶಿಕ್ಷಣಕ್ಕೆ ಮತ್ತು ಸಮಾಜಕ್ಕೆ ಅನನ್ಯ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀಗಳ ಮಾರ್ಗದರ್ಶನ ಸಮಾಜಕ್ಕೆ ಅಗತ್ಯವಾಗಿದೆ. ರಾಜ್ಯದ ನಾನಾ ಭಾಗಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸುವ ಮೂಲಕ ಪ್ರತಿನಿತ್ಯ ಸಾವಿರಾರು ಮಕ್ಕಳಿಗೆ ಅನ್ನದಾಸೋಹ, ಜ್ಞಾನದಾಸೋಹ ನೀಡುತ್ತಾ ಯಾವ ಸರ್ಕಾರಗಳು ಮಾಡದ ಕೆಲಸವನ್ನು ಮಾಡುತ್ತಿದ್ದಾರೆ. ಅವರ ಸೇವೆ ಆದರ್ಶಪ್ರಾಯ ಅನುಕರಣೀಯವಾದುದು. ತಮ್ಮ ೧೦೬ ವಯಸ್ಸಿ ನಲ್ಲಿಯೂ ಶ್ರೀಗಳು ಲವಲವಿಕೆಯಿಂದ ಓಡಾಡುತ್ತಾ ಶ್ರೀಮಠ ಹಾಗೂ ಶ್ರೀಮಠಕ್ಕೆ ಸೇರಿದ ಕಾಲೇಜುಗಳ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುತ್ತಿರುವುದು ನಿಮ್ಮೆಲ್ಲರ ಭಾಗ್ಯ ಎಂದರು.

ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ ದೇಶದ ಪ್ರಮುಖ ಕಾಲೇಜುಗಳಲ್ಲಿ ಒಂದಾಗಿದೆ. ಈ ಕಾಲೇಜಿನಲ್ಲಿ ರಾಜ್ಯ ಹಾಗೂ ಹೊರ ರಾಜ್ಯ ಸೇರಿದಂತೆ ದೇಶದ ನಾನಾ ಕಡೆಯಿಂದ ವಿದ್ಯಾರ್ಥಿಗಳು ವ್ಯಾಸಂಗ ಮಾಡು ತ್ತಿದ್ದಾರೆ. ಇದು ಸಹ ಅಭಿಮಾನ ಹಾಗೂ ಹೆಮ್ಮೆಯ ಸಂಗತಿ ಎಂದು ಶ್ಲಾಘಿಸಿದರು.

'ಗುರು'ವಿನ ಮಹತ್ವದ ಬಗ್ಗೆ ಪ್ರಸ್ತಪಿಸಿದ ಡಾ. ಕಲಾಂ ಅವರು ಪ್ರತಿಯೊಬ್ಬ ವ್ಯಕ್ತಿಯ ಯಶಸ್ಸಿನ ಹಿಂದೆ ಗುರು ಇರುವುದನ್ನು ಸ್ಮರಿಸಿ ತಮ್ಮ ತಂದೆ-ತಾಯಿ, ಹಾಗೂ ೧೯೫೪ರಲ್ಲಿ ಮದ್ರಾಸ್‌ನಲ್ಲಿದ್ದ ತಮ್ಮ ಪ್ರೊಫೆಸರ್ ನೀಡಿದ ಮಾರ್ಗದರ್ಶನ ಹಾಗೂ ಪ್ರೋತ್ಸಾಹವೇ ಇಂದು ತಮ್ಮನ್ನು ಈ ಮಟ್ಟಕ್ಕೆ ಬರುವಂತೆ ಮಾಡಿದೆ. ಅಂತೆಯೇ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯವೂ ಸಹ ಉತ್ತಮ ಶಿಕ್ಷಕರನ್ನು ಹೊಂದಿದ್ದು ಅವರ ಮಾರ್ಗದರ್ಶನ ಪಡೆಯುವ ಮೂಲಕ ರಾಜ್ಯಕ್ಕೆ ಹಾಗೂ ರಾಷ್ಟ್ರಕ್ಕೆ ಕೀರ್ತಿ ತಂದು ಕೊಡುವಂತೆ ಕಿವಿಮಾತು ಹೇಳಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಸುಪ್ರಿಂ



ಸಭೆಯನ್ನು ಕುರಿತು ಅರ್ಥಪೂರ್ಣ ಭಾಷಣ ನೀಡುತ್ತಿರುವ ನಿವೃತ್ತ ನ್ಯಾಯಮೂರ್ತಿ ಗೌ. ಶ್ರೀ ಎಂ.ಎನ್. ವೆಂಕಟಾಚಲಯ್ಯ ಅವರು

ಕೋರ್ಟ್‌ನ ನಿವೃತ್ತ ಮುಖ್ಯ ನ್ಯಾಯಮೂರ್ತಿ ಶ್ರೀ ಎಂ.ಎನ್. ವೆಂಕಟಾಚಲಯ್ಯ ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ "೨೦-೨೧ನೇ ಶತಮಾನದಲ್ಲಾದಷ್ಟು ತಾಂತ್ರಿಕ ಕ್ರಾಂತಿ ಹಿಂದೆ ಆಗಿಲ್ಲ. ಈಗ ಭಾರತದ ಶೇ. ೫೩ರಷ್ಟು ಜನರು ೨೫ ವರ್ಷಕ್ಕಿಂತ ಒಳಗಿನವರು. ಇನ್ನೂ ಹೆಚ್ಚೆಚ್ಚು ಸಾಧನೆ ಮಾಡುವ ಆಶಾಭಾವ ಹೊಂದಿದ್ದೇವೆ" ಎಂದರು.

ಕೃಷಿ ಕ್ಷೇತ್ರದ ಬಗ್ಗೆ ಪ್ರಸ್ತಾಪಿಸುತ್ತಾ ಚೀನಾದಲ್ಲಿ ಭಾರತಕ್ಕಿಂತ ಕಡಿಮೆ ಕೃಷಿ ಭೂಮಿಯಿದ್ದರೂ ಅಹಾರ ಉತ್ಪಾದನೆಯಲ್ಲಿ ಚೀನಾ ಮುಂದಿದೆ, ಅದಕ್ಕೆ ಕಾರಣ ಅವರು ಕೃಷಿಯಲ್ಲಿ ಅನುಸರಿಸುತ್ತಿರುವ ತಂತ್ರಜ್ಞಾನ ಎಂದು ಅಭಿಪ್ರಾಯಪಟ್ಟರು. ಉತ್ಪಾದಿಸಿದ ಆಹಾರ ಉತ್ಪನಗಳನ್ನು ಸಂರಕ್ಷಿಸುವ ತಂತ್ರಜ್ಞಾನದ ಬಗ್ಗೆಯೂ ಭಾರತೀಯರು ಚಿಂತನೆ ನಡೆಸಬೇಕಿದೆ ಎಂದರು.

ಡಾ. ಅಬ್ದುಲ್ ಕಲಾಂ ಅವರ ಬಹುಮುಖ ಪ್ರತಿಭೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದ ನ್ಯಾಯ ಮೂರ್ತಿಗಳು ಇಂದಿನ ಯುವಕರಿಗೆ ಪ್ರೇರಕ ಶಕ್ತಿ ಡಾ. ಕಲಾಂ ಅವರು. ಯುವಜನತೆಯನ್ನು ಭವಿಷ್ಯ ನಿರ್ಮಾಣದತ್ತ ತೊಡಗಿಸುವ ಉತ್ತಮ ಶಿಕ್ಷಣದ ಅವಶ್ಯಕತೆಯಿದೆ, ದೇಶವನ್ನು ಮುನ್ನಡೆಸಬಲ್ಲ ಕ್ರಿಯಾಶೀಲ ನಾಯಕರ ಅನಿವಾರ್ಯತೆ ಇದೆ ಎಂದು ಈ ಸಂದರ್ಭದಲ್ಲಿ ತಿಳಿಸಿದರು.

೨೧ನೇ ಶತಮಾನವನ್ನು ತಂತ್ರಜ್ಞಾನ ಯುಗವೆಂದೇ ಬಿಂಬಿಸಲಾಗುತ್ತಿದೆ. ವಿಜ್ಞಾನ-ತಂತ್ರಜ್ಞಾನ ಕ್ಷೇತ್ರದಲ್ಲಿನ ಸಂಶೋಧನೆ, ಅವಿಷ್ಕಾರಗಳು ರಾಜ್ಯದಲ್ಲಿ ನಡೆಯುತ್ತಿದ್ದು ಇದನ್ನು ದೇಶದ ಸರ್ವತೋಮುಖ ಅಭಿವೃದ್ಧಿಗೆ ಬಳಸಿಕೊಳ್ಳಬೇಕಾಗಿದೆ ಎಂದು ಆಶಿಸಿದರು.

ದಿವ್ಯಸಾನ್ನಿಧ್ಯದನ್ನು ವಹಿಸಿದ್ಧ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ಶಿವನುಡಿಯಲ್ಲಿ "ಸ್ವಾತಂತ್ರ್ಯ ಬಂದು ೬೬ ವರ್ಷ ಕಳೆದರೂ ಬಡವರು ಬಡವರಾಗಿಯೇ ಉಳಿದಿದ್ದು, ಶ್ರೀಮಂತರು ಮತ್ತಷ್ಟು ಶ್ರೀಮಂತರಾಗುತ್ತಿದ್ದಾರೆ. ಆದರೆ ಡಾ. ಕಲಾಂ ಅವರ 'ಮುನ್ನೋಟ-೨೦೨೦' ಯುವ ಸಮುದಾಯಕ್ಕೆ ದಾರಿದೀಪವಾಗಿದೆ ಎಂದು ನುಡಿದರು.



ಸ್ವಾಗತಿಸುತ್ತಿರುವ ನಿರ್ದೇಶಕರಾದ ಡಾ॥ ಎಂ.ಎನ್. ಚನ್ನಬಸಪ್ಪನವರು ಹಾಗೂ ವಂದನಾರ್ಪಣೆಯನ್ನು ಸಲ್ಲಿಸಿದ ಪ್ರಾಂಶುಪಾಲರಾದ ಡಾ॥ ಶಿವಕುಮಾರಯ್ಯ ಅವರು








ಸಮಾರಂಭ ವೇದಿಕೆಯಲ್ಲಿ ಉಪಸ್ಥಿತರಿರುವ ತುಮಕೂರು ವಿವಿ ಕುಲಾಧಿಪತಿಗಳಾದ ಡಾ॥ ರಾಜಾ ಸಾಹೇಬ್, ಶ್ರೀ ಎನ್.ಆರ್. ಜಗದೀಶ್, ಮತ್ತಿತರ ಗಣ್ಯಮಾನ್ಯರುಗಳು

ಪೂಜ್ಯ ಶ್ರೀಗಳವರು ಇಂದಿನ ನಾಯಕರ ಬಗ್ಗೆ ಪ್ರಸ್ತಾಪಿಸುತ್ತ, "ನಮ್ಮ ನಾಯಕರು ಉತ್ತಮರಾಗಿದ್ದರೆ, ಹಿಂಬಾಲಕರು ಒಳ್ಳೆಯುವರಾಗಿರುತ್ತಾರೆ. ನಾಯಕರು ಕೆಟ್ಟವರಾಗಿದ್ದರೆ ಹಿಂಬಾಲಕರು ಅದೇ ಮಾರ್ಗದಲ್ಲಿ ಮುನ್ನಡೆಯುತ್ತಾರೆ. ವ್ಯವಸ್ಥೆಯಲ್ಲಿ ಮೇಲಿನಿಂದ ಕೆಳಹಂತದವರೆಗೆ ಸರಿಪಡಿಸುವುದರಿಂದ ಉತ್ತಮ ಸಮಾಜ ನಿರ್ಮಾಣ ಮಾಡಬಹುದು. ದುರಂತವೆಂದರೆ ಸ್ವಾರ್ಥ, ಹಣದ ಹಿಂದೆ ಬಿದ್ದಿರುವುದರಿಂದ ಸಮಾಜದಲ್ಲಿನ ವೈಪರೀತ್ಯಗಳನ್ನು ಸರಿಪಡಿಸುವುದು ಕಷ್ಟಕರವಾಗಿದೆ" ಎಂದು ಅಭಿಪ್ರಾಯಪಟ್ಟರು.

ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು, ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯದ ನಿರ್ದೇಶಕ ಡಾ. ಎಂ.ಎನ್. ಚನ್ನಬಸಪ್ಪ, ವಿಧಾನಪರಿಷತ್ ಸದಸ್ಯ ಡಾ. ಎಂ.ಆರ್. ಹುಲಿನಾಯ್ಕರ್, ತುಮಕೂರು ವಿಶ್ವವಿದ್ಯಾಲಯದ ಕುಲಪತಿ ಡಾ. ರಾಜಾಸಾಬ್, ಪ್ರಾಂಶುಪಾಲ ಡಾ. ಶಿವಕುಮಾರಯ್ಯ, ಉದ್ಯಮಿ ಶ್ರೀಎನ್.ಆರ್.ಜಗದೀಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಕಾರ್ಯಕ್ರಮವು ವಿದ್ಯಾರ್ಥಿಗಳಾದ ಕುಮಾರಿ ಅಕ್ಷತಾ ಭಾಸ್ಕರ್ ಮತ್ತು ಕುಮಾರಿ ಸಿರಿಗೌರಿ ಅವರ ಪ್ರಾರ್ಥನೆ ಯೊಂದಿಗೆ ಪ್ರಾರಂಭವಾಯಿತು. ಡಾ. ಎಂ.ಎನ್. ಚನ್ನಬಸಪ್ಪ ಸ್ವಾಗತಿಸಿದರು. ಡಾ. ಶಾಲಿನಿ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ☆

॥ ಓಂ ಶ್ರೀ ಗುರುಬಸವಲಿಂಗಾಯನಮಃ ॥

## ವಿನಮ್ರ ಮನವಿ

ನಮ್ಮ ಗುರುವರೇಣ್ಯರೂ, ಶ್ರೀ ಸಿದ್ಧಗಂಗಾ ಮಠದ ಕಾರಣಿಕ ಪುರುಷರೂ, ಕರ್ನಾಟಕರತ್ನ ತ್ರಿವಿಧದಾಸೋಹ ಮೂರ್ತಿಗಳು ಆದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಶತಸಂವತ್ಸರಗಳನ್ನು ಕ್ರಮಿಸಿ ಇದೀಗ 106 ವರ್ಷಗಳ ಸೇವಾಪಥದಲ್ಲಿ ಮುನ್ನಡೆದಿರುವುದು ನಾಡಿನ ಸಮಸ್ತ ಮಹಾಜನತೆಗೆ ತಿಳಿದುದೇ ಆಗಿರುತ್ತದೆ. ಪೂಜ್ಯಪಾದರು ಆರೋಗ್ಯವಾಗಿದ್ದಾರಾದರೂ ವಯೋಧರ್ಮದಿಂದಾಗಿ ಪ್ರವಾಸ, ಪ್ರಯಾಣಗಳನ್ನು ಮಾಡುವಲ್ಲಿ ಹೆಚ್ಚು ಶ್ರಮವಾಗುತ್ತಿದ್ದು, ತಮ್ಮ ಆಯಾಸವನ್ನು ವ್ಯಕ್ತಪಡಿಸುವುದಿಲ್ಲ ಹಾಗೂ ಆ ನೋವನ್ನು ಅವರೇ ಅನುಭವಿಸುತ್ತಿದ್ದಾರೆಂಬುದನ್ನು ಅನಿವಾರ್ಯವಾಗಿ ಭಕ್ತಾದಿಗಳ, ಅಭಿಮಾನಿಗಳ ಹಾಗೂ ಹಳೆಯ ವಿದ್ಯಾರ್ಥಿಗಳ ಗಮನಕ್ಕೆ ತರಲಾಶಿಸುತ್ತ, ಪೂಜ್ಯಪಾದರನ್ನು ಯಾವುದೇ ಸಂದರ್ಭದಲ್ಲಾದರೂ ಪೂಜಾದಿಕಾರ್ಯಗಳಿಗಾಗಲೀ, ಸಭೆ ಸಮಾರಂಭಗಳಿಗಾಗಲೀ ಅಹ್ವಾನಿಸಿಬಾರದಾಗಿ ಆಶಿಸುತ್ತೇವೆ. ಸೇವಾಕಾಂಕ್ಷಿಗಳು ಶ್ರೀಮಠಕ್ಕೆ ಬಂದು ದರ್ಶನಾಶೀರ್ವಾದಗಳನ್ನು ಪಡೆದುಕೊಳ್ಳುವಿರಾಗಿ ನಂಬಿರುತ್ತೇವೆ. ಶ್ರೀಗಳವರಿಗೆ ವಿಶ್ರಾಂತಿ ಆತ್ಯಗತ್ಯವಾಗಿರುತ್ತದೆ ಎಂದು ತಿಳಿಸುತ್ತಾ ಎಲ್ಲರ ಸಹಕಾರವನ್ನು ನಿರೀಕ್ಷಿಸುತ್ತೇವೆ.

ಸಂಪಾದಕರು
ಸಿದ್ಧಗಂಗಾ ಮಾಸಪತ್ರಿಕೆ

# PROGRESS PATH OF SIDDAGANGA INSTITUTE OF TECHNOLOGY TUMKUR-572103, KARNATAKA

Sree Siddaganga Math, headed by His Holiness Dr.Sree Sree Sivakumara Swamiji was concentrating on providing facilities for primary and secondary education for poor students specially for girls in rural areas by establishing schools in rural areas, till 1960's.

In 1960's many major industrial, infrastructural and irrigation projects were taken up by both State and Central Governments and as a result of which, there was a great demand for engineers. But, there were only seven or eight engineering colleges in Karnataka State and many deserving students from rural areas were deprived of the privilege of pursuing technical education. Prominent citizens of Tumkur and Tumkur District led by Sri. T.N. Kempahonnaiah and Sri G.M. Siddaramanna appealed to Dr. Sree Sree Sivakumara Swamiji to start an engineering college in Tumkur so that poor and deserving students in and around Tumkur and neighbouring districts will have the opportunity to pursue engineering education. They volunteered to provide all the support and the members of the Tumkur Grain Merchants Association volunteered to contribute one percent of their transactions towards infrastructure development of the institute.

In order to provide an opportunity to the students from rural areas to pursue technical education and higher education, Sree Siddaganga Education Society was established in 1963 with Swamiji as the President and the Society started Siddaganga Institute of Technology in 1963. Subsequently, it has established many institutions of higher education.

One of the philanthropists, Mr. M.V.Shivappa volunteered to donate 35 acres of land which was then very close to Tumkur town and the present campus is located on this land.

Siddaganga Institute of Technology was started with only 3 branches namely Civil, Electrical and Mechanical Engineering with a total annual intake of 120 students.

**SIT is the first institution in the country to offer a condensed B.E. programme in the above three branches providing an opportunity for Diploma Holders to pursue higher education leading to B.E.degree.** This has provided very good opportunity for motivated in-service Diploma Holders to obtain higher qualification and has helped them to occupy higher

ೀ೮೯೪ರಲ್ಲಿ ಬೃಹತ್ ಪ್ರಮಾಣದ ಕಿಟ್ಟೆಲ್ ನಿಘಂಟು ಪ್ರಕಟವಾಯಿತು. ಈ ನಿಘಂಟು ಇಂದಿಗೂ ಕನ್ನಡ ಭಾಷೆಯಲ್ಲಿ ಪ್ರಮಾಣಭೂತವಾದ ನಿಘಂಟಾಗಿದೆ. -ಕರ್ನಾಟಕ ಏಕೀಕರಣಕ್ಕೆ ಮಡಿದ ಮಹನೀಯರು





positions in their professional career.

The institute had the privilege of having had the services of highly dedicated Principals with high vision as a result of which the institute has grown leaps and bounds and has emerged as one of the reputed institutions in the state of Karnataka and in the country.

Now, the institute is offering 12 UG programmes and 13 PG programmes including MBA and MCA and 15 departments of the institute are recognised as research centres by VTU. 101 scholars are pursuing their research studies leading to Ph.D degree at these research centres. The institute has experienced, qualified and devoted faculty numbering 284 and 79 of them have Ph.D from reputed institutions like IISc, Bangalore, IIT Madras, IIT Bombay, IIT Kharagpur, IIT Guwahati, etc. Another 67 of our faculty are pursuing Ph.D programmes at various reputed institutions.

**The following are the courses offered :**

**Under Graduate Courses :**

| | |
|---|---|
| 1. Civil Engineering | 60 |
| 2. Mechanical Engineering | 180 |
| 3. Electrical & Electronics Engineering | 60 |
| 4. Electronics Communication Engg | 120 |
| 5. Chemical Engineering | 60 |
| 6. Instumentation Technology | 60 |
| 7. Industrial Engg & Management | 60 |
| 8. Computer Scinece & Engineering | 120 |
| 9. Architecture | 60 |
| 10. Information Science &Engineering | 60 |
| 11. Telecommunication Engineering | 60 |
| 12. Biotechnology | 30 |
| | **930** |

**Post Graduate Courses**

| | |
|---|---|
| 1. M. Tech - Structural Engineering | 18 |
| 2. M. Tech - Chemical Engineering | 18 |
| 3. M. Tech - Thermal powerEngg | 18 |
| 4. M. Tech - Computer Science& Engg | 18 |
| 5. M. Tech - Signal Processing | 18 |
| 6. M. Tech- Manufacturing Sc & Mgmt | 18 |
| 7. M. Tech - Transporation Engg & Mgmt | 18 |
| 8. M. Tech - Computer Networks | 18 |
| 9. M. Tech - Computer Interated Mfg. | 18 |
| 10. M. Tech - Digital Communication | 18 |
| 11. M. Tech - Power Electronics | 18 |
| 12. MCA | 60 |
| 13. MBA | 120 |
| Total | **378** |

೧೯೨೬ರಿಂದ ೧೯೪೧ರವರೆಗೆ ಮೈಸೂರು ಸಂಸ್ಥಾನದ ದಿವಾನರಾಗಿದ್ದ ಮಹಮ್ಮದ್ ಇಸ್ಮಾಯಿಲ್‌ರ ಹಿರಿಯರು ಪರ್ಷಿಯಾದಿಂದ ಬೆಂಗಳೂರಿಗೆ ಬಂದು ನೆಲೆಸಿದ್ದವರು.
- ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು.

**Ph.D. Programmes are offered in the following depatments :**

1. Chemical Engineering
2. Mechanical Engineering
3. Civil Engineering
4. Computer Science & Engineering
5. Instrumentation Technology
6. Electronics & Communication Engg.
7. Management
8. Physics
9. Chemistry
10. Mathematics
11. Industrial Engineering & Mgmt.
12. Telecommunication Engineering
13. Biotechnology
14. MCA
15. Electrical & Electronics Engineering

Our faculty members have considered research as an integral part of teaching and are actively working on sponsored research projects with a total funding of Rs.200 millions. Their excellent research work has resulted in good publications in conferences and refereed journals.

The institute is closely interacting with industries like ABBGISL and R&D organisations like GTRE, CABS, CAIR, CPRI etc. M/s Quest Global, Bangalore an Aerospace based company is closely interacting with us. They make recruitments throughout the country including IITs, NITs. They have classified the institutions they are visiting for recruitment into: (a) Platinum (b) Gold (c) Silver. SIT is one among the ten institutions grouped under PLATINUM along with IITs and NITs.

SIT is a part of Consortium of seven Engineering colleges for designing & fabricating for launch of PICO Satellite which is scheduled to be launched during 2014. Nearly 50 of our students are working for this project.

SIT campus is spread over 50 acres and the whole area is landscaped and is lush green. Tumkur enjoys the same salubrious climate as that of Bangalore.

All the departments in the institute have well equipped laboratories and the number of computers in the institute is 1900 and are located in 29 Computer Centres which are all networked with fibre optic backbone. Round the clock internet facility is provided to all the Computer Laboratories, Faculty Chambers, Hostels, Class Rooms, through 40 Mbps leased line.

S.I.T. is also the beneficiary of the World Bank assisted Technical Education Quality Improvement Programme Phase-I. Under







Phase-I the institute received Rs.9.35crore and this is utilised to establish new laboratories and strengthening P.G programmes.

SIT is one among the seven self financed institutes in the state of Karnataka and one of the 14 self financed institutes across the country selected for the award of grant of Rs.4.00 crore under TEQIP Phase-II a world bank assisted programme. This grant is meant for scaling-up PG programmes, promoting R&D activities and faculty development.

SIT is one among the 10 institutions across the country and one among the four in the state selected by the Ministry of Human Resources and Development, Govt. of India, under TEQIP for establishment of Centre of excellence. The institute is receiving a grant of Rs.5.00 crore for establishment of Centre of Excellence in Applied Research and Nanotechnology (ART).

**Awards :**

The Government of Karnataka has honoured Siddaganga Institute of Technology, Tumkur with State Environment Protection Award for the year 2011-12 in recognition of excellent performance of S.I.T. Tumkur in respect of environment protection. Along with the citation, the college has also received a cash award of Rupees One lakh.

SIT has bagged the Best Performing College Award in the 35th Series of Seminar and Exhibition of Student Projects 2011-12 arranged by Karnataka State Council for Science and Technology, Indian Institute of Science, Bangalore - 560 012.

SIT has also bagged 'e-INDIA-2013 Green Campus of the Year' award during 2013.

**Alumni**

The institute has a 3000+ strong network of alumni spread all over the globe in 24 countries.

**Placements :**

More than 40 reputed industries including TCS, WIPRO, Mind Tree, L&T, Aricent and Brahmos are visiting our institute for campus placements. Majority of the eligible students are being placed through the campus placements.

**Principals who rendered their service in developing college**

| | | |
|---|---|---|
| 1. | Prof. G.S. Shivanna | 1963-1970 |
| 2. | Prof. M. Chikkannayappa | 1970-1979 |
| 3. | Prof. B.M. Karakareddy | 1979-1982 |
| 4. | Dr. G.S. Kumaraswamy | 1982-1985 |
| 5. | Prof. G. Parameshwarappa | 1985-1991 |
| 6. | Dr. M.N. Channabasappa | 1991-2006 |
| 7. | Prof. Basavarajaiah | 2006-2007 |
| 8. | Dr. S.M. Shashidhar | 2007-2009 |
| 9. | Dr. Shivakumaraiah | 2009- |

☆

# *Inauguration of the Golden Jubilee at SIT, Tumkur on 18-09-2013 Benediction by His Holiness Dr. Sree Sree Sivakumara Swamiji*

* Respected Dr. Abdul Kalmji
* Respected Justice M.N. Venkatachalaiah Ji
* Life Members and members of the Board of Management of SSES
* Generous public who have supported Siddaganga Institute of Technology
* Faculty and Staff of SIT
* Dear Students of SIT
* Representatives of Press & Media
* Invitees, Ladies and Gentlemen

I am very happy to participate in the inauguration of the Golden Jubilee of Siddaganga Institute of Technology.

The progress made by the institute during the last 50 years is quite impressive. The fact that it is attracting students from various parts of the country is an indicator to the quality of education that the institute is able to provide. I am sure that faculty and staff of SIT are aware of the keen competition prevailing in all sectors and education is no exemption. Teachers of SIT, committed as they are to their profession will certainly pay attention to innovative research, and guide students to become good problem solvers. This approach will also result in students getting better opportunities for placement which is crucial for sustained growth of the institute.

It is a great day for our students that the golden jubilee of their institute is inaugurated by Dr. A.P.J. Abdul Kalam, an eminent Engineer and a great patriot. It is also significant that the programme is presided by Justice M.N. Vekatachalaiah, an erudite scholar who is known for his legal acumen.,

It is a great occasion to get motivated to work with commitment keeping in view the need of the country. We are the largest democracy in the world. Even after 66 years of independance, we are facing many problems. The fact is events have happened in such a way that the rich are becoming richer and the poor are becoming poorer. Vision-2020 is a great concept. Dr. Kalamji has addressed over 5 million youth below the age of 17 and inspired them to become active participants of India Vision-2020.

The motivated youngsters should be able to

ಅನೇಕ ಬಂಗಾಳಿ ಭಾಷೆಯ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ ಹೆಸರಾಂತ ಲೇಖಕ ಬಿ. ವೆಂಕಟಾಚಾರ್ಯರು ನಾಗಮಂಗಲ ತಾಲ್ಲೂಕಿನ ಬಿಂಡಿಗನವಿಲೆಯವರು.
- ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು





adopt a way of life which keeps them away from all undesirable activities. But they do not have many role models to follow.

Bhagavadgeetha stresses this point:

यद्यदाचरतिश्रेष्ठः तत् तदेवेतरोजनः।

**What ever the leader does, the followers will do that and only that'**

Thus, if the leader is good, the followers will also be good and if the leader is bad the followers will also be bad.

So, 'cleaning from the top' is the solution. But, we are now in such a situation that any such attempt to change will be nullified by vested interests with their money lags.

In a democratic setup elections are expected to bring the needed change. But if the elections get vitiated ?

Perhaps, a motivated strong youth power actively participating in elections can hope to bring in the change.

Enlightened Buddha way back in 6th Century B.C. has identified 'Craving and Greed' of man as responsible for the strife, unhappiness, hatred among men and nations.

'Craving' in the ultimate means war which will destroy both the victor and the vanquished. 'Greed' will result in the accumulation of wealth in a few hands which will deny basic needs for any.

Basavanna (12th Century A.D.) a social reformer of Karnataka has given the golden rule of Kayaka and Dasoha for the well being of the society. Every one should work. Out of the earnings, utilise a part for your simple living and use the rest for the good of the society, which result, no accumulation of wealth takesplace.

तैत्तरीय उपनिषद् tells us the ultimate truth

न कर्मणा । न प्रजया धनेन
त्यागेनैकेन अमृतत्वमानशुः ।

'Not by rituals, not by raising family, not by money, only by sacrifice (giving away) one attains immortality

I pray God Almighty to bless SIT and everyone of you

शिवं भूयात्
(May God be with you)

ಕನ್ನಡದ ಕಸ್ತುರಿಯ ಪರಿಮಳವ ಸುತ್ತೆಲ್ಲ ಪಸರಿಸುವ ದೀಕ್ಷಾಬದ್ಧ ಕಾರ್ಯಕ್ಕೆ ಕೈಯಿಕ್ಕಿದವರು ಬೀದರ್ ಜಿಲ್ಲೆಯ ಭಾಲ್ಕಿ ಹಿರೇಮಠ ಸಂಸ್ಥಾನದ ಪೂಜ್ಯ ಶ್ರೀ ಚನ್ನಬಸವ ಪಟ್ಟದೇವರು. ಶಾಲೆಯ ಹೊರಗಡೆ ಉರ್ದು ಬೋರ್ಡ್ ಹಾಕಿಸಿ ಒಳಗೆ ಕನ್ನಡ ಕಲಿಸುವ ಸೇವೆ ನಡೆಸಿದ ಕನ್ನಡಾಭಿಮಾನಿಗಳು. ದಲಿತರ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಶ್ರೀಗಳು ಬಾಯುಪಚಾರವ ಮಾತನಾಡದೆ ದಲಿತರಿಗೆ ಲಿಂಗದೀಕ್ಷೆ ನೀಡಿದರು. ದಲಿತರಿಂದ ಸವರ್ಣೀಯರ ಭಾವಿಯ ನೀರನ್ನು ಮೇಲೆತ್ತಿಸಿ ಕುಡಿಸಿದರು. ದಲಿತರಿಗೆ ದೇವಾಲಯದೊಳಗೆ ಪ್ರವೇಶವನ್ನು ಮಾಡಿಸಿದರು.
-- ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು

# Dr. A.P.J. Abdul Kalam's Address at the Golden Jubilee Celebrations of Siddaganga Institute of Technology, Tumkur, on Sep 18 2013.

**"Culture of Excellence"**

**Knowledge is powered by Technology and innovation**

I am delighted to visit the Siddaganga Institute of Technology, Tumkur and to inaugurate the Golden Jubilee Celebrations of the Institute. My respects to Revered Dr Sree Sree Sivakumara Swamiji for nurturing the institution with value system. I also greet the pioneers, Director, members of the Faculty, staff and students of this great institution. Established in the year 1963 with only three branches, the SIT is providing engineering education in 12 UG programmes and in an equal number of M.Tech programmes. The vision of SIT "to develop young minds in a learning environment of high academic ambience by synergizing spiritual values and technological competence" is indeed the need of the hour. Friends, on the occasion of the Golden Jubilee of the SIT, I would like to share a few thoughts on the topic "Culture of Excellence".

Dear friends, when I see Sree Sree Sivakumara Swamiji with us, let me recall an event on the day his 100th birthday was celebrated.

Radiating message on Giving: His Holiness Sree Sree Sivakumara Swamiji of Sree Siddaganga Math of Tumkur is an example of spreading the message of "giving". He has been on a tireless mission of socio-economic development and eradication of inequalities in education. He saw education and alleviation of hunger among the masses as an effective means to enrich human capacity which in turn would contribute to national reconstruction. His Holiness Swamiji has followed the footprints of his Guru of providing free boarding home to the students which is now serving the needs of over 8,000 students. In addition 2000 pilgrims and visitors in the Math are also provided food every day. During the last seven decades Swamiji is the founder of well over hundred and twenty five educational institutions ranging from nursery to institutions of technology, pure science, arts, management, vocational training and performing arts.

During the 100th birthday of His Holiness Sree Sree Shivakumara Swamiji - a message of "Giving" came to my mind celebrating his contribution, which I would like to share with you:

**Radiating message on Giving**

*"O my fellow citizens,*
*In giving, you receive happiness,*
*In Body and Soul.*
*You have everything to give.*
*If you have knowledge, share it.*
*If you have resources, share it with the needy.*

ಉತ್ತರ ಕರ್ನಾಟಕದಲ್ಲಿ ಮರಾಠೀ ಪ್ರಾಬಲ್ಯ ಹೆಚ್ಚಿದ್ದ ಸಮಯದಲ್ಲಿ ಕನ್ನಡದ ಬಗ್ಗೆ ಪ್ರೀತಿ ಹುಟ್ಟಿಸುವ ಕೆಲಸ ಆಗಬೇಕಾಗಿತ್ತು. ಆ ಕೆಲಸವನ್ನು ಬಹು ಪ್ರೀತಿಯಿಂದ ಮಾಡಿದವರು ಶಾಂತಕವಿಗಳು (ಸಕ್ಕರಿ ಬಾಳಾಚಾರ್ಯ) -ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು.





*Use your mind and heart,*
*To remove the pain of the suffering,*
*And, cheer the sad hearts.*
*In giving, you receive happiness.*
*Almighty will bless all your actions."*

**Research - Teaching - Research**

Friends, good teaching emanates from Research. The teachers' love for research and their experience in research are vital for the growth of the institution. Any institution is judged by the level and extent of the research work it accomplishes. This sets in a regenerative cycle of excellence. Experience of research leads to quality teaching and quality teaching imparted to the young in turn enriches the research.

Technology is the non-linear tool available to humanity, which can affect fundamental changes in the ground rules of economic competitiveness. Science is linked to technology through applications. Technology is linked to economy and environment through manufacture of knowledge products. Economy and environment are linked to technology, which promotes prosperity to the society. We have to use innovation to generate high value added products for becoming a global player. The foundation of academic research is excellence in action.

**Culture for excellence**

Friends, you all belong to the youth community, which should stand for culture of excellence. Moreover, excellence is not by accident. It is a process, where an individual continuously strives to better oneself. The performance standards are set by yourself, you work on your dreams with focus and are prepared to take calculated risks and you do not get deterred by failures. As you move towards your dreams, you step up the targets and try to reach higher and higher. When you strive to work to realize your potential, in the process, you will increase your performance. At all times you are not in competition with anyone else, but your own self. This is the culture of excellence. I am sure, SIT is being built with technology focus based on innovation and excellence which are crucial for research.

Friends, I would like to share an experience, how my professor, during my engineering education, made us to design a low level attack aircraft. By this project students acquired experience of system design, system integration and system management.

**Learning integrated system design**

I was assigned a project to design a low-level attack aircraft together with five other colleagues. I was given the responsibility of system design and system integration by integrating other team members. Also, I was responsible for aerodynamic and structural design of the project. The other five of my team took up the design of propulsion, control, guidance, avionics and instrumentation of the aircraft. My design teacher Prof. Srinivasan, the then Director of MIT (Madras Institute of Technology), was our guide. He reviewed the project and declared my work to be gloomy and disappointing. He didn?t lend an ear to

ಆರ್. ನರಸಿಂಹಾಚಾರ್ಯರ ಹೆಸರು ಚಿರಸ್ಥಾಯಿಯಾಗಿರುವುದು ಅವರು ಸಂಪಾದಿಸಿ, ಪ್ರಕಟಿಸಿರುವ 'ಕರ್ನಾಟಕ ಕವಿಚಿಂತನೆ'ಯ ಮೂರು ಸಂಪುಟಗಳಿಂದ. - ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು.

